# ೩

# ಲಾಂಗ್ವೇಜ್ ಟೀಚಿಂಗ್ ಗೇಮ್ಸ್ ಅಂಡ್ ಕಾಂಟೆಸ್ಟ್ಸ
## – ಡಬ್ಲ್ಯೂ ಆರ್ ಲೀ

– ಸುರಂಜನಾ ಬರುವಾ




**Language Teaching Games and Contests By W R Lee**

ಲಾಂಗ್ವೇಜ್ ಟೀಚಿಂಗ್ ಗೇಮ್ಸ್ ಅಂಡ್ ಕಾಂಟೆಸ್ಟ್ಸ (ಭಾಷಾ ಬೋಧನೆಯ ಆಟಗಳು ಮತ್ತು ಸ್ಪರ್ಧೆಗಳು)

ಲೇಖಕರು: ಡಬ್ಲ್ಯೂ ಆರ್ ಲೀ (ಸರಣಿ ಶೀರ್ಷಿಕೆ: ಆನ್ವಯಿಕ ಭಾಷಾವಿಜ್ಞಾನ ಮತ್ತು ಭಾಷಾ ಅಧ್ಯಯನ)

ಮುದ್ರಣ: ೧೯೯೪(೧೯೭೯)

ಪ್ರಕಟಣೆ: ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಯುಕೆ,

ಪುಟಗಳು: ೨೧೪

ಐಎಸ್‌ಬಿಎನ್: ೦೧೯೪೩೨೭೧೬೭

ಸಾರಾಂಶ: ಆಟಗಳನ್ನು ಬಳಸಿ ಭಾಷಾ ಕಲಿಕೆ ಎನ್ನುವ ಯೋಜನೆ ಮಕ್ಕಳಲ್ಲಿ ಸಂತಸವನ್ನು ಮೂಡಿಸುವಂಥದ್ದು. ಆಟವೆಂದರೆ ಮಕ್ಕಳು ಸಮಯದ ಮಿತಿಯೇ ಇಲ್ಲವೆಂಬಂತೆ ಕಲಿಯುತ್ತಾರೆ. ಈ ಪುಸ್ತಕವು ವಿವಿಧ ಆಟಗಳನ್ನು ಬಳಸಿ ಭಾಷಾ ಬೋಧನೆ ಮಾಡಲು ಬಹಳ ಸಹಾಯಕವಾದುದಾಗಿದೆ. ಭಾಷಾ ಶಿಕ್ಷಕರು ತಮ್ಮ ತರಗತಿಗಳಿಗೆ ಇಲ್ಲಿರುವ ಆಯ್ದ ಆಟಗಳನ್ನು ಬಳಸಬಹುದಾಗಿದೆ. ಪ್ರತಿಯೊಂದು ಶಾಲೆಯ ಗ್ರಂಥಾಲಯದಲ್ಲಿ ಕಡ್ಡಾಯವಾಗಿ ಇರಬೇಕಾದ ಪುಸ್ತಕ ಎನ್ನಬಹುದು.

**ಪ್ರಮುಖ ಪದಗಳು:** ಭಾಷೆಯ ಬೋಧನೆ– Language Teaching, ಬೋಧನೆಯ ಆಟಗಳು– Language Games, ಯಶಸ್ವಿ ಮತ್ತು ಆಸಕ್ತಿದಾಯಕ ಸಂವಹನ– successful and interesting communication, ಕಲಿಕೆಯಲ್ಲಿ ಗರಿಷ್ಠ ಮಟ್ಟದ ಭಾಗವಹಿಸುವಿಕೆ ಮತ್ತು ಸಂತೋಷ– maximum participation and enjoyment while learning, ಎಲ್ಲ ವಯಸ್ಸಿನ ಗುಂಪುಗಳಿಗೆ ಮತ್ತು ಭಾಷಾ ಹಂತಗಳಿಗೆ ಆಟ– games for all age groups and language levels.

'ಲಾಂಗ್ವೇಜ್ ಟೀಚಿಂಗ್ ಗೇಮ್ಸ್ ಅಂಡ್ ಕಾಂಟೆಸ್ಟ್ಸ್' – ಈ ಪುಸ್ತಕವನ್ನು ಈಗ ಪ್ರಮುಖ ಕೃತಿಯೆಂದು ಪರಿಗಣಿಸಲಾಗಿದೆ. ಪರಿಣಾಮಕಾರಿ ಮತ್ತು ಸಂತೋಷದಾಯಕ ಭಾಷಾ ಕಲಿಕೆಗಾಗಿ ಇದನ್ನು ವಿನ್ಯಾಸಗೊಳಿಸಲಾಗಿದೆ. ಇದು ಎಲ್ಲ ವಯಸ್ಸಿನ ಗುಂಪುಗಳಿಗೆ ಮತ್ತು ಭಾಷಾ ಹಂತಗಳಿಗೆ ಆಟಗಳನ್ನು ಒಳಗೊಂಡಿದೆ. ಇದು ವಿಶೇಷವಾಗಿ ಹೆಚ್ಚು ಸಂಖ್ಯೆಯಲ್ಲಿ ವಿದ್ಯಾರ್ಥಿಗಳಿರುವ ತರಗತಿಗಳಲ್ಲಿ ಬಳಸಲು ಸೂಕ್ತವಾಗಿರುತ್ತದೆ. ಇದರಲ್ಲಿ ಹತ್ತು ಅಧ್ಯಾಯಗಳಿದ್ದು ಪ್ರತಿಯೊಂದು ಅಧ್ಯಾಯವೂ ಒಂದು ಕಿರು ಪರಿಚಯದೊಂದಿಗೆ ಪ್ರಾರಂಭವಾಗುತ್ತದೆ, ಅನಂತರ ಆಟದ ವಿವರಣೆ ಇದೆ. ಅಧ್ಯಾಯಗಳು ಸೂಕ್ತ ಶೀರ್ಷಿಕೆಗಳನ್ನು ಹೊಂದಿವೆ: 'ರಚನೆಯ ಆಟಗಳು', 'ಶಬ್ದಸಂಪತ್ತಿನ ಆಟಗಳು', 'ಕಾಗುಣಿತದ ಆಟಗಳು', 'ಉಚ್ಚಾರಣಾ ಆಟಗಳು', 'ಸಂಖ್ಯೆಗಳ ಆಟಗಳು', 'ಕೇಳಿ–ಮಾಡಿ ಆಟಗಳು', 'ಓದಿ–ಮಾಡಿ ಆಟಗಳು', 'ಆಟಗಳು ಮತ್ತು ಬರವಣಿಗೆ', 'ಮೂಕಾಭಿನಯ ಮತ್ತು ಕಿರುಪಾತ್ರಾಭಿನಯ ನಾಟಕ', 'ಭಾಷಾ ಸಂಘಗಳ ಆಟಗಳು ಮತ್ತು ಚರ್ಚಾ ಆಟಗಳು'.

ಸನ್ನಿವೇಶಗಳಲ್ಲಿ ಭಾಷೆಯನ್ನು ಬಳಸುವುದರಿಂದ ಮತ್ತು ಸಂವಹಿಸುವುದರ ಮೂಲಕ ಒಂದು ಭಾಷೆಯನ್ನು ಕಲಿಯಬಹುದೆಂಬುದು ಈ ಪುಸ್ತಕದ ಮೂಲಭೂತ ತತ್ತ್ವವಾಗಿದೆ. ಆಟಗಳ ಮೂಲಕ ಭಾಷಾ ಬೋಧನೆಯು ವಿದ್ಯಾರ್ಥಿಗಳ ಕಾರ್ಯಕ್ಷಮತೆಯನ್ನು ಸುಧಾರಿಸುವುದು ಮಾತ್ರವಲ್ಲ ಆಟಗಳು ಸಾಮಾನ್ಯವಾಗಿ ಇನ್ನೊಬ್ಬರ ಸಾಧನೆಯನ್ನು ಮೀರಿಸುವಂಥವು, ಆದರೆ ಸಹಪಾಠಿಗಳ ಒಳಗೊಳ್ಳುವಿಕೆಯಿಂದ ಹೆಚ್ಚು ಸಂತೋಷದಾಯಕವೆಂದು ಸಾಬೀತುಪಡಿಸುತ್ತವೆ. ಭಾಷಾ ಆಟಗಳನ್ನು ಬಳಸುವ ಒಂದು ಪ್ರಯೋಜನವೆಂದರೆ ಆಗಾಗ್ಗೆ, ಈ ಆಟಗಳು ಭಾಷಾಶಾಸ್ತ್ರದ ಪ್ರಕಾರಗಳ ಅಧ್ಯಯನದಿಂದ ಕಲಿಯುವವರ ಗಮನವನ್ನು ಸೆಳೆಯುತ್ತವೆ: "ಅವರು ಭಾಷೆಯನ್ನು ಕುರಿತು ಯೋಚಿಸುವುದನ್ನು ನಿಲ್ಲಿಸುತ್ತಾರೆ ಮತ್ತು ಅದನ್ನು ಬೇರೆ ರೀತಿಯಲ್ಲಿ ಪರಿಗಣಿಸುವ ವಿಧಾನವಾಗಿ, ಸ್ವೀಕಾರಾರ್ಹವಾಗಿ ಅಥವಾ ಉತ್ಪಾದಕವಾಗಿ ಬಳಸುತ್ತಾರೆ." ( ಪುಟ ೨–೩). ಯಶಸ್ವಿ ಮತ್ತು ಆಸಕ್ತಿದಾಯಕ ಸಂವಹನಗಳ ಪುನರಾವರ್ತನೆ ಭಾಷಾ ಕಲಿಕೆಯ ಒಂದು ಆನಂದದಾಯಕ ಮತ್ತು ಪ್ರೋತ್ಸಾಹದಾಯಕ ವಿಧಾನವಾಗಿದೆ. ಪ್ರತಿಯೊಂದು ಅಧ್ಯಾಯವೂ ಭಾಷಾ ಕಲಿಕೆಯ

ವಿವಿಧ ಅಂಶಗಳನ್ನು ನಿರ್ವಹಿಸುವ ವಿವಿಧ ಆಟಗಳನ್ನು ಸೂಚಿಸುತ್ತದೆ. ಉದಾಹರಣೆಗೆ ಅಧ್ಯಾಯ–೧ರಲ್ಲಿ 'ರಚನೆಯ ಆಟಗಳನ್ನು ಪ್ರಸ್ತಾವಿಸುತ್ತದೆ, ಅದರ ಗುರಿ ವಿದ್ಯಾರ್ಥಿಗಳಿಗೆ ಭಾಷೆಯ ಸ್ವರೂಪವನ್ನು ತಿಳಿಸುವುದು.' 'ಊಹಿಸುವ ಆಟಗಳು' ಕೂಡಾ ಇಲ್ಲಿ ಸೇರಿವೆ. ಇದು ಕಲಿಯುವವರ ಪ್ರಶ್ನೆಗಳಿಗೆ ಸರಿಯಾದ ಉತ್ತರ ಎಂದು ಅವರು ಭಾವಿಸುವ ವಿಷಯವನ್ನು ಸಂವಹಿಸಲು ಪ್ರೋತ್ಸಾಹಿಸುತ್ತದೆ. ಪ್ರಾಥಮಿಕ ಹಂತದಲ್ಲಿ (ಉದಾಹರಣೆಗೆ: ಹೌದು / ಇಲ್ಲ ಉತ್ತರಗಳು), ಮಾಧ್ಯಮಿಕ ಹಂತದ (ಉದಾಹರಣೆ: ಇಲ್ಲಿ / ಅಲ್ಲಿ ರೀತಿಯ ಉತ್ತರಗಳೊಂದಿಗೆ ಶಬ್ದಸಂಪತ್ತನ್ನು ಹೆಚ್ಚಿಸುವುದು) ಅಥವಾ ಹೆಚ್ಚಿನ ಹಂತಗಳು (ಉದಾಹರಣೆ: ನಿಬಂಧನೆಗಳು / ಕಲ್ಪನೆಗಳು "ನಾನು ಭೇಟಿ ನೀಡುವೆ", ಮತ್ತು ಕಾಲಗಳು / ಭಾಷಣದ ವರದಿ ಇವುಗಳು ಕಲಿಕೆಯಲ್ಲಿ ಉತ್ಸಾಹವನ್ನು ತುಂಬುತ್ತವೆ.)

ಅದೇ ರೀತಿ, ೨ ರಿಂದ ೫ ನೇ ಅಧ್ಯಾಯಗಳು ಶಬ್ದಸಂಪತ್ತು, ಕಾಗುಣಿತ, ಉಚ್ಚಾರಣೆ ಮತ್ತು ಸಂಖ್ಯೆಗಳ ಪ್ರಾಥಮಿಕ, ಮಧ್ಯಂತರ ಅಥವಾ ಮುಂದುವರಿದ ಹಂತಗಳಲ್ಲಿ ಕಲಿಯಬಹುದಾದ ಹಲವಾರು ಉದಾಹರಣೆಗಳನ್ನು ನೀಡುತ್ತವೆ. ೬ ಮತ್ತು ೭ ನೇ ಅಧ್ಯಾಯಗಳು ಭಾಷೆಯನ್ನು ಕಲಿಯುವವರ ಸಹಜ ಆಲಿಸುವಿಕೆ ಮತ್ತು ಓದುವ ಕೌಶಲಗಳನ್ನು ತಿಳಿಯಲು ವಿಶೇಷವಾಗಿ ಉಪಯುಕ್ತವಾಗಿವೆ. ಮೌಖಿಕ ಆದೇಶಗಳನ್ನು ಗುರುತಿಸುವುದು, ಕಥೆ ಹೇಳುವುದು/ಚಿತ್ರಿಸುವುದು ಇತ್ಯಾದಿಗಳ ಮೂಲಕ, ಕೇಳುವುದು ಮತ್ತು ಸಂವಹನ ಮಾಡುವುದು ಮೊದಲಾದವುಗಳನ್ನು ಒಳಗೊಂಡಿದೆ. ೭ನೇ ಅಧ್ಯಾಯವು ಪರಿಚಿತವಲ್ಲದ ಮುದ್ರಣ ಮಾಧ್ಯಮದ ಆದೇಶಗಳಿಗೆ ಪ್ರತಿಕ್ರಿಯಿಸಲು ಸಹಾಯ ಮಾಡುವ ಮತ್ತು ಆಟದ ಮಾನ್ಯತೆಗೆ ಅನುಕೂಲವಾಗುವಂತಹ ಆಟಗಳ ರೂಪಾಂತರಗಳನ್ನು ನೀಡುತ್ತದೆ. ಅಧ್ಯಾಯ ೮ ಆಟಗಳ ಮೂಲಕ ಅರ್ಥಪೂರ್ಣವಾದ ಬರವಣಿಗೆಯ ಅಭ್ಯಾಸವನ್ನು ಪರಿಚಯಿಸುತ್ತದೆ ಮತ್ತು ಪ್ರೋತ್ಸಾಹಿಸುತ್ತದೆ. (ಅಕ್ಷರಗಳ–ಆಕಾರದೊಂದಿಗೆ ಪ್ರಾಥಮಿಕ ಹಂತದ ಆಟಗಳಿಂದ ಕಲಿಯುವವರಿಗೆ ಪರಿಚಯ: A ಎನ್ನುವುದು ಗುಡಿಸಲಿನ ಥರ, S ಎಂಬುದು ಹಾವಿನ ರೀತಿ ಇದೆ, T ಕೊಡೆಯಂತಿದೆ ಎನ್ನುವಂತಹ ಆಟಗಳು). ಅಂತಿಮವಾಗಿ, ೯–೧೦ ಅಧ್ಯಾಯಗಳು ಮೂಕಾಭಿನಯ, ಕಿರುಪಾತ್ರಾಭಿನಯದ ನಾಟಕ ಮತ್ತು ಚರ್ಚೆಗಳನ್ನು ಒಳಗೊಂಡಿದ್ದು, ಕಲಿಕೆಯಲ್ಲಿ ಗರಿಷ್ಠ ಮಟ್ಟದ ಭಾಗವಹಿಸುವಿಕೆ ಮತ್ತು ಸಂತೋಷವನ್ನು ಖಾತರಿಪಡಿಸುತ್ತವೆ. ಈ ಸಹಾಯಕ ಪುಸ್ತಕವು ಎಲ್ಲ ಶಿಕ್ಷಕ ತರಬೇತಿ ಕಾರ್ಯಕ್ರಮಗಳಲ್ಲಿ 'ಓದಲೇಬೇಕಾದ' ಪಟ್ಟಿಯಲ್ಲಿರಬೇಕು.

* * *

**ಚಿಂತನಾತ್ಮಕ ಪ್ರಶ್ನೆಗಳು:**

೧. ಆಟಗಳಿಂದ ಭಾಷಾ ಬೋಧನೆ ಸಾಧ್ಯವೆ?

೨. ನಿಮ್ಮ ತರಗತಿಗಳಲ್ಲಿ ನೀವು ಯಾವ ಯಾವ ಆಟಗಳನ್ನು ಆಡಿಸುತ್ತೀರಿ ಯೋಚಿಸಿ.

೩. ನಿಮ್ಮ ಭಾಷಾ ಬೋಧನಾ ತರಗತಿಯಲ್ಲಿಯೂ ಇಂತಹ ಯಾವುದಾದರೂ ಆಟಗಳನ್ನು ಆಡಬಹುದೇ?

**ಸುರಂಜನಾ ಬರುವಾ:** ದೆಹಲಿಯ ವಿಶ್ವವಿದ್ಯಾಲಯದಿಂದ ಭಾಷಾಶಾಸ್ತ್ರದಲ್ಲಿ ಪಿಎಚ್.ಡಿ., ಹೊಂದಿದ್ದಾರೆ. ಪ್ರಸ್ತುತ ಅಸ್ಸಾಂ ಸ್ಟಡೀಸ್, ತೇಜ್ಪುರ್ ವಿಶ್ವವಿದ್ಯಾಲಯ, ಅಸ್ಸಾಂನ ಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದಾರೆ. ಸಂಭಾಷಣೆ/ಸಂವಾದ ವಿಶ್ಲೇಷಣೆ, ಭಾಷಾ ಬೋಧನೆ, ಲಿಂಗತ್ವದ ಅಧ್ಯಯನಗಳು ಮತ್ತು ಭಾಷಾಂತರ ಅಧ್ಯಯನಗಳು ಅವರ ಆಸಕ್ತಿಯ ಕ್ಷೇತ್ರಗಳಾಗಿವೆ. suranjana.barua@gmail.com

**ಅನುವಾದ:** ಕಾರ್ತಿಕ್ ಕೆ / **ಪರಿಶೀಲನೆ:** ರಾಜಗೋಪಾಲ್

**ಮೂಲ:** Language and Language Teaching, Volume 1 Number 2 July 2012.

❑